ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ರಾಜ್ಯ ಹೆದ್ದಾರಿ ಅಭಿವೃದ್ಧಿಗೆ ಕೆ.ಶಿಫ್-3 ಯೋಜನೆಯಡಿ ಜಮೀನು ಖರೀದಿಸುವ ಕುರಿತು

ಶ್ರೀ ಕೆ.ಸಿ. ಕೊಂಡಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

254 (256) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಮಂಡ್ಯ ಜಿಲ್ಲೆ, ನಾಗಮಂಗಲ ತಾಲ್ಲೂಕು ವ್ಯಾಪ್ತಿಯ ಕೆಲವು ಗ್ರಾಮಗಳಲ್ಲಿ ಕರ್ನಾಟಕ ರಾಜ್ಯ ಹೆದ್ದಾರಿ ಅಭಿವೃದ್ಧಿ ಯೋಜನೆ ಕೆ.ಶಿಫ್-3 ಯೋಜನೆಗೆ ಅವಶ್ಯವಿರುವ ಜಮೀನನ್ನು ಭೂ ಮಾಲೀಕರಿಂದ ಖರೀದಿಸುವ ಪ್ರಕ್ರಿಯೆ ಯಾವ ಹಂತದಲ್ಲಿದೆ;

(ಆ) ನಾಗಮಂಗಲ ತಾಲ್ಲೂಕು, ದೇವಲಾಪುರ ಹೋಬಳಿಯಲ್ಲಿ ಈ ಯೋಜನೆಗೆ ಎಷ್ಟು ಜಮೀನು ಖರೀದಿಯಾಗಿ, ಪರಿಹಾರ ವಿತರಿಸಲಾಗಿದೆ; ಪರಿಹಾರ ಹಣಕ್ಕಾಗಿ ಮಧ್ಯವರ್ತಿಗಳು ಒತ್ತಡ ತರುತ್ತಿರಬಹುದೇ;

(ಇ) ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕು, ದೇವಲಾಪುರ ಹೋಬಳಿ, ಕುಡುಗುಬಾಳು ಗ್ರಾಮದಲ್ಲಿ ಸರ್ವೆ ನಂ. 24/ಸಿ ನಲ್ಲಿ 25 ಗುಂಟೆ ಜಮೀನಿನ ಮಾಲೀಕರಾದ ಬಡ ರೈತ ಮಹಿಳೆಯ 15 ಗುಂಟೆ ಜಮೀನು ಭೂಸ್ವಾಧೀನಕ್ಕೆ ಪರಿಹಾರ ಹಣವನ್ನು ವಿತರಿಸಲಾಗಿದೆಯೇ;

(ಈ) ಈ ಮಧ್ಯೆ ಕೆಲವು ಮಧ್ಯವರ್ತಿಗಳು ಪರಿಹಾರ ಹಣಕ್ಕಾಗಿ

ಈ ಮಹಿಳೆಗೆ ಮೋಸ ಮಾಡುವ ಸಲುವಾಗಿ ಸರ್ವೆ

ನಂ. 24/ಬಿ.ಪಿ1 ಎಂದು ಖಾತೆ ತೆರೆಯಿಸಿ, ಪರಿಹಾರ ಹಣಕ್ಕಾಗಿ ಪ್ರಯತ್ನಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಇದರಲ್ಲಿ ಅಧಿಕಾರಿಗಳು ಶಾಮೀಲಾಗಿರುವರೇ; ಸರ್ವೆ ನಂ. 24/ಬಿ ಯಾರ ಹೆಸರಿನಲ್ಲಿದೆ; ಎಷ್ಟು ವರ್ಷಗಳಿಂದಿದೆ; ಸರ್ವೆ ನಂ. 24/ಬಿ.ಪಿ1 ಎಂದು ಯಾರಿಂದ ಯಾರಿಗೆ ಖಾತೆ ವರ್ಗಾವಣೆಗೊಂಡಿದೆ ? (ವಿವರ ನೀಡುವುದು)